<u>**ಕರ್ನಾಟಕ ವಿಧಾನ ಪರಿಷತ್ತು**</u>

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1296

ಸದಸ್ಯರ ಹೆಸರು : ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು)

ಉತ್ತರಿಸುವ ದಿನಾಂಕ : 23.09.2021

ಉತ್ತರಿಸುವ ಸಚಿವರು : ಮುಖ್ಯ ಮಂತ್ರಿಗಳು

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| (ಅ) | ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದ್ರಾಬಾದ್-ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013ರ ಅಡಿಯಲ್ಲಿ ಮೂಲ ವೃಂದದಿಂದ ಹೈದ್ರಾಬಾದ್-ಕರ್ನಾಟಕ ಸ್ಥಳೀಯ ವೃಂದದಲ್ಲಿ ಗುರುತಿಸಿಕೊಂಡ ಸರ್ಕಾರಿ ನೌಕರರಿಗೆ ಮುಂಬಡ್ತಿ ನೀಡುವಾಗ ನಿಗಧಿಪಡಿಸಿರುವ ಪ್ರಮಾಣ ಎಷ್ಟು; ಅನುಸರಿಸುತ್ತಿರುವ ಮಾನದಂಡಗಳೇನು; | ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದ್ರಾಬಾದ್-ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013ರ ಕಂಡಿಕೆ3ರಲ್ಲಿ ಹೈದ್ರಾಬಾದ್-ಕರ್ನಾಟಕ ಪ್ರದೇಶದಲ್ಲಿರುವ ರಾಜ್ಯ ಸಿವಿಲ್ ಸೇವಾ ಹುದ್ದೆಗಳ ಪೈಕಿ ಗ್ರೂಪ್-ಎ ಮತ್ತು ಗ್ರೂಪ್-ಬಿ ಹುದ್ದೆಗಳಲ್ಲಿ 75%, ಗ್ರೂಪ್-ಸಿ ಹುದ್ದೆಗಳಲ್ಲಿ 80% ಮತ್ತು ಗ್ರೂಪ್-ಡಿ ಹುದ್ದೆಗಳಲ್ಲಿ 85% ಹದ್ದೆಗಳನ್ನು ಹಾಗೂ ಸದರಿ ಆದೇಶದ ಕಂಡಿಕೆ 13ರಲ್ಲಿ ರಾಜ್ಯ ಮಟ್ಟದ ಕಛೇರಿ ಅಥವಾ ಸಂಸ್ಥೆಗಳಲ್ಲಿ ಎಲ್ಲಾ ವೃಂದದ ಹುದ್ದೆಗಳಲ್ಲಿ 8% ಹುದ್ದೆಗಳನ್ನು ಹೈದ್ರಾಬಾದ್-ಕರ್ನಾಟಕ ಪ್ರದೇಶದ ಸ್ಥಳೀಯ ವ್ಯಕ್ತಿಗಳಿಗೆ ಮೀಸಲಿರಿಸಲು ಅವಕಾಶವನ್ನು ಕಲ್ಪಿಸಲಾಗಿರುತ್ತದೆ. ಸಂಬಂಧಪಟ್ಟ ಇಲಾಖೆಗಳ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ವಿವಿಧ ವೃಂದದ ಹುದ್ದೆಗಳ ನೇರ ನೇಮಕಾತಿ ಮತ್ತು ಮುಂಬಡ್ತಿ ಪ್ರಮಾಣವನ್ನು ನಿಗಧಿಪಡಿಸಲಾಗಿದ್ದು, ಅದೇ ನಿಯಮಗಳು ಸ್ಥಳೀಯ ವೃಂದದ ಹುದ್ದೆಗಳಿಗೆ ಪ್ರತ್ಯೇಕವಾಗಿ ಅನ್ವಯವಾಗುತ್ತವೆ. |
| (ಆ) | ಕೆಲವು ಇಲಾಖೆಗಳಲ್ಲಿ ಹೈದ್ರಾಬಾದ್-ಕರ್ನಾಟಕ ಪ್ರದೇಶಕ್ಕೆ ಮೀಸಲಾದ ಹುದ್ದೆಗಳ ಪೈಕಿ ಮೇಲಿನ ಹಂತದಲ್ಲಿ ಹುದ್ದೆಗಳು ಖಾಲಿ ಇದ್ದರೂ, ಕೆಳಗಿನ ಹಂತದಲ್ಲಿನ ನೌಕರರು stagnant ಆಗುವ (ಮುಂಬಡ್ತಿಗೆ ಅರ್ಹತೆ ಹೊಂದಿಲ್ಲದೇ ನಿವೃತ್ತಿವರೆಗೂ ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಹುದ್ದೆಯಲ್ಲಿಯೇ ಉಳಿಯುವ) ಕಾರಣದಿಂದ ಕೆಳ ಹಂತದಲ್ಲಿ ಮುಂಬಡ್ತಿಗೆ ಅರ್ಹತೆ ಇದ್ದರೂ, ಮುಂಬಡ್ತಿ ಯಿಂದ ವಂಚಿತರಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ವಿಧಾನ ಪರಿಷತ್ತಿನ ಸಚಿವಾಲಯದಲ್ಲಿ ಇಂತಹ ಒಂದು ಪ್ರಕರಣವು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಈ ಕುರಿತಂತೆ ಇನ್ನಾವುದೇ ಇಲಾಖೆಗಳಿಂದ ಸಿಆಸುಇ (ಹೈ-ಕ ವಿಶೇಷ ಕೋಶ)ದ ಅಭಿಪ್ರಾಯ ಕೋರಿ ಪ್ರಸ್ತಾವನೆ ಸ್ವೀಕೃತವಾಗಿರುವುದಿಲ್ಲ. ಇಂತಹ ಪ್ರಕಣಗಳು ಬಹಳ ಅಪರೂಪವಾಗಿದ್ದು, ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದಲ್ಲಿನ ಪ್ರಕರಣಕ್ಕೆ ಸಂಬಂಧಿಸಿದಂತೆ ಸ್ಥಳೀಯ ವೃಂದಕ್ಕೆ ಮೀಸಲಿರಿಸಿರುವ ಹುದ್ದೆಗಳನ್ನು ನಿಮ್ನೀಕರಿಸುವ ಅಥವಾ ಮೇಲ್ದರ್ಜೆಗೇರಿಸುವ ಅಂಶವು ಆಡಳಿತಾತ್ಮಕ |

| | | |
|---|---|---|
| ಇ) | ಈ ವಿಚಾರದಲ್ಲಿ ಇಲಾಖಾವಾರು ಪರಿಶೀಲನೆ ನಡೆಸಲಾಗಿದೆಯೇ; ದೂರುಗಳು ಬಂದಿವೆಯೇ; ಹಾಗಿದ್ದಲ್ಲಿ ಈ ಸಮಸ್ಯೆಗೆ ಪರಿಹಾರವೇನು; | ವಿಷಯವಾಗಿದ್ದು, ಇದರಲ್ಲಿ ನಿಯಮಗಳನ್ನು ರೂಪಿಸುವ ಯಾವುದೇ ಅಂಶವು ಇಲ್ಲವಾದ್ದರಿಂದ ಹುದ್ದೆಗಳ ನಿಮ್ನೀಕರಣಕ್ಕೆ ಸಂಬಂಧಿಸಿದಂತೆ ಅಗತ್ಯವಿದ್ದಲ್ಲಿ ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಿ ತಮ್ಮ ಹಂತದಲ್ಲಿಯೇ ಸೂಕ್ತ ನಿರ್ಣಯ ತೆಗೆದುಕೊಳ್ಳುವಂತೆ ಕಾರ್ಯದರ್ಶಿಗಳು, ಕರ್ನಾಟಕ ವಿಧಾನಪರಿಷತ್ತು, ಇವರಿಗೆ ತಿಳಿಸಲಾಗಿರುತ್ತದೆ. |
| ಈ) | ಈ ರೀತಿಯ ಪರಿಸ್ಥಿತಿ ಉದ್ಭವವಾದಂತಹ ಸಂದರ್ಭದಲ್ಲಿ, ನೌಕರರು ಮುಂಬಡ್ತಿಯಿಂದ ವಂಚಿತರಾಗುವುದನ್ನು ತಪ್ಪಿಸುವ ದೃಷ್ಟಿಯಿಂದ ಮೇಲಿನ ಹಂತದಲ್ಲಿ ಖಾಲಿ ಇರುವ ಹುದ್ದೆಗಳನ್ನು ನಿಮ್ನೀಕರಿಸಿ, ಕೆಳಗಿನ ಹಂತದ ನೌಕರರಿಗೆ ಮುಂಬಡ್ತಿ ನೀಡುವ ಕುರಿತು ಸರ್ಕಾರ ಕ್ರಮ ಕೈಗೊಳ್ಳುವುದೇ; ಈ ನಿಟ್ಟಿನಲ್ಲಿ ಅಗತ್ಯ ಆದೇಶ ಎಷ್ಟು ಸಮಯದಲ್ಲಿ ಹೊರಡಿಸಲಾಗುವುದು? | ಇದೊಂದು ಆಡಳಿತಾತ್ಮಕ ವಿಷಯವಾಗಿದ್ದು, ಈ ಬಗ್ಗೆ ಇಲಾಖೆಯ ಹಂತದಲ್ಲಿಯೇ ನಿರ್ಣಯ ತೆಗೆದುಕೊಳ್ಳಬಹುದಾಗಿರುವ ಹಿನ್ನೆಲೆಯಲ್ಲಿ ಇಂತಹ ಪ್ರಕರಣಗಳಿಗೆ ಸಂಬಂಧಿಸಿದಂತೆ ಯಾವುದೇ ಆದೇಶ ಅಥವಾ ನಿಯಮಗಳನ್ನು ರೂಪಿಸುವ ಅವಶ್ಯಕತೆ ಕಂಡುಬರುವುದಿಲ್ಲ. |

ಸಿಆಸುಇ 183 ಹೈಕಕೋ 2021

(ಬಸವರಾಜ ಬೊಮ್ಮಾಯಿ)

ಮುಖ್ಯಮಂತ್ರಿ